ಜೆ. ವಿ. ಗಾಯತ್ರಿ

# ಬೆಂಗಳೂರಿನಲ್ಲಿ ಇಂಗ್ಲೀಷ್ ಶಿಕ್ಷಣದ ಆರಂಭ

೧೮೫೪ರ ಪ್ರಸಿದ್ಧ 'ಹ್ಯಾಲಿಫಾಕ್ಸ್ ಡಿಸ್ಪಾಚ್' ನಂತೆ ಪಾಶ್ಚಾತ್ಯ ಮಾದರಿಯ ವಿದ್ಯಾಭ್ಯಾಸ ಅತ್ಯಂತ ಸೂಕ್ತವಾದುದೆಂದು ಪರಿಗಣಿಸಲ್ಪಟ್ಟಿದ್ದರೂ ಭಾರತದ ಇತರ ಪ್ರಾಂತ್ಯಗಳಂತೆ ಮೈಸೂರಿನಲ್ಲಿ ಬ್ರಿಟಿಷ್ ಕಮೀಷನರ್‌ಗಳ ಆಡಳಿತದಲ್ಲಿ ವ್ಯವಸ್ಥಿತ ರೀತಿಯ ವಿದ್ಯಾಭ್ಯಾಸದ ಪದ್ಧತಿಯಿರಲಿಲ್ಲ. ಇಂಗ್ಲೀಷ್ ಭಾಷೆ ಉನ್ನತಮಟ್ಟದ ವಿದ್ಯಾಸಂಸ್ಥೆಗಳಲ್ಲಿ ಪ್ರಾಮುಖ್ಯತೆಯನ್ನು ಪಡೆದಿದ್ದರೂ ಸಹ ಕೆಳಗಿನ ತರಗತಿಗಳಲ್ಲಿ ದೇಶೀಯ (**Vernacular**) ಭಾಷೆ ಬಳಕೆಯಲ್ಲಿತ್ತು. ಐರೋಪ್ಯ ಕೃತಿಗಳನ್ನು ಆಯಾಯ ಸ್ಥಳೀಯ ಭಾಷೆಗಳಿಗೆ ಭಾಷಾಂತರಿಸಿದ್ದರಿಂದ ಅಂದಿನ ಸಮಾಜದ ಎಲ್ಲಾ ವರ್ಗದ ಜನಗಳಿಗೂ ಇಂಗ್ಲೀಷ್ ಭಾಷೆಯ ಪ್ರಜ್ಞೆ ಮೂಡಿತು. ಬ್ರಿಟಿಷ್ ಇಂಡಿಯಾದಲ್ಲಿ ಇಂಗ್ಲೀಷ್ ಶಿಕ್ಷಣವಿಲ್ಲದ ವ್ಯಕ್ತಿ ಸರ್ಕಾರದ ಉನ್ನತ ಹುದ್ದೆಗೆ ಹೋಗಲು ಸಾಧ್ಯವಿಲ್ಲವೆನ್ನುವಷ್ಟು ಇಂಗ್ಲೀಷ್ ವಿದ್ಯಾಭ್ಯಾಸದ ಬಗ್ಗೆ ಜನಗಳಿಗೆ ಅರಿವುಂಟಾಯಿತು.

ಮೈಸೂರಿನಲ್ಲಿ ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ೧೮೩೨ರಲ್ಲಿ ಇಂಗ್ಲೀಷನ್ನು ಪರಿಚಯಿಸಿದ ಮೊದಲಿಗರು. 'ರಾಜಾ ಉಚಿತ ಶಾಲೆ' ಎಂದು ಸ್ಥಾಪಿಸಲ್ಪಟ್ಟ ಈ ಸಂಸ್ಥೆ ಮಿಷನರಿ ಟಿ. ಹಡ್ಸನ್ ರವರ ಮೇಲ್ವಿಚಾರಣೆಯಲ್ಲಿ ಮೈಸೂರಿನಲ್ಲಿ ನಡೆಯುತ್ತಿತ್ತು.

ಕ್ರೈಸ್ತಧರ್ಮ ಪ್ರಚಾರ ಮತ್ತು ಮತಾಂತರ ಮುಖ್ಯ ಧ್ಯೇಯವಾಗಿದ್ದಾಗ್ಯೂ ಪ್ರಾರಂಭದ ದಿಶೆಯಲ್ಲಿ (೧೮೪೦ ರಿಂದ ೧೮೫೪ರ ವರೆಗೆ) ಮೈಸೂರಿನಲ್ಲಿ ಮಿಷನರಿಗಳು ಮಾಡಿದ ಇಂಗ್ಲೀಷ್ ಪ್ರಚಾರಕಾರ್ಯ ಪ್ರಶಂಸನೀಯವಾದುದು. ದಿ ಲಂಡನ್ ಮಿಷನ್, ದಿ ಬೇಸಲ್ ಮಿಷನ್ ಮತ್ತು ದಿವೆಸ್ಲಿಯನ್ ಮಿಷನ್‌ಗಳು ಇಂಗ್ಲೀಷ್ ಭಾಷಾ ಪ್ರಚಾರಕಾರ್ಯದಲ್ಲಿ ಮುಂದಾಳತ್ವ ವಹಿಸಿದ್ದವು. ಇವುಗಳ ಪೈಕಿ ಲಂಡನ್ ಸೊಸೈಟಿ ಅತ್ಯಂತ ಹಳೆಯ ಮಿಷನ್ ಆಗಿದ್ದು, ೧೮೨೪ರಲ್ಲಿ ರೆವರೆಂಡ್ ಎಸ್. ಲಾಡ್ಲರ್ ಮತ್ತು ರೆವರೆಂಡ್ ಫ್ರೋಬ್ಸ್‌ರವರಿಂದ ಸ್ಥಾಪಿಸಲ್ಪಟ್ಟಿತು. ಇವರಿಬ್ಬರೂ ನುರಿತ ವಿದ್ವಾಂಸರು ಮತ್ತು ಐರೋಪ್ಯ ಪ್ರಾಧ್ಯಾಪಕರುಳ್ಳ ಒಂದು ಇಂಗ್ಲೀಷ್ ಕಾಲೇಜನ್ನು ಬೆಂಗಳೂರಿನಲ್ಲಿ ಸ್ಥಾಪಿಸಬೇಕೆಂಬ ಅಭಿಲಾಷೆ ಹೊಂದಿದ್ದು, ಈ ಯೋಜನೆ ಬೆಂಗಳೂರಿನ ಪ್ರಜೆಗಳಿಂದ ಸ್ವಾಗತಿಸಲ್ಪಟ್ಟರೂ ನಿರ್ದೇಶಕರ ಸಮಿತಿ (**Board of Directors**)ಯ ಮಂಜೂರಾತಿ ದೊರಕದೆ ಬೆಂಗಳೂರು ಅಂದೇ ಉನ್ನತ ಮಟ್ಟದ ವಿದ್ಯಾಸಂಸ್ಥೆಯೊಂದನ್ನು ಕಳೆದುಕೊಂಡಿತು.

ಬೆಂಜಮಿನ್ ಎಲ್. ರೈಸ್ (೧೮೧೪–೧೮೮೭) ಬೆಂಗಳೂರಿನಲ್ಲಿ ನೆಲೆಸಿದ ಮತ್ತೊಬ್ಬ ಮಿಷನರಿಯಾಗಿದ್ದು, ವಿದ್ಯಾಭ್ಯಾಸದ ಪ್ರಗತಿಗೆ ಶ್ರಮಿಸಿದವನಾಗಿದ್ದ. ಬೆಂಗಳೂರಿನ ಲಂಡನ್ ಮಿಷನ್‌ನಲ್ಲಿ ಮೂರು ತಮಿಳು ದಿನದ ಶಾಲೆಗಳಲ್ಲದೆ ಇಂಗ್ಲೀಷ್ ಮತ್ತು ಕನ್ನಡ ಬೋಧಿಸುತ್ತಿದ್ದ ಅನಾಥ ಬಾಲಕರ ಕೇಂದ್ರವೊಂದಿತ್ತು. ಅಲ್ಲದೆ ಶ್ರೀಮತಿ ರೈಸ್ ಮತ್ತು ಶ್ರೀಮತಿ ಸ್ಯೂವೆಲ್‌ರವರ ಮೇಲ್ವಿಚಾರಣೆಯಲ್ಲಿ ಬಾಲಕಿಯರ ಬೋರ್ಡಿಂಗ್

ಶಾಲೆಯೊಂದು ೧೮೪೧ರಲ್ಲಿದ್ದು ಇಂಗ್ಲೀಷ್ ಮತ್ತು ತಮಿಳಿನಲ್ಲಿ ಬೋಧನೆ ನಡೆಯುತ್ತಿತ್ತು.

**ವೆಸ್ಲಿಯನ್ ಸೊಸೈಟಿ :** ಬೆಂಗಳೂರಿನ ದಂಡಿನಲ್ಲಿ ೧೮೩೪ರಲ್ಲಿ ಹಡ್ಸನ್‌ರಿಂದ ಸ್ಥಾಪಿಸಲ್ಪಟ್ಟಿದ್ದ ಇಂಗ್ಲೀಷ್ ಶಾಲೆಯ ವಿದ್ಯಾರ್ಥಿಗಳ ಪ್ರಗತಿಯ ಬಗ್ಗೆ ಕಮೀಷನರ್ ಸರ್ ಮಾರ್ಕ್ ಕಬ್ಬನ್‌ರವರು ಸಂತುಷ್ಟರಾಗಿದ್ದರು ಮತ್ತು ಶಾಲೆಗೆ ಗೌರ್ನರ್ ಜನರಲ್ ಲಾರ್ಡ್ ಬೆಂಟಿಂಕರು ಮೂರುನೂರು ರೂಪಾಯಿಗಳ ಸಹಾಯಧನ ಕೊಟ್ಟಿದ್ದರು.[1] ೧೮೪೦ರಲ್ಲಿ ಈ ಮಿಷನರಿಯು ಬೆಂಗಳೂರಿನಲ್ಲಿ ಪಠ್ಯ ಪುಸ್ತಕಗಳ ಪ್ರಕಟಣೆಗಾಗಿ ಒಂದು ಪ್ರೆಸ್ ಪ್ರಾರಂಭಿಸಿತು. ವೆಸ್ಲಿಯನ್ ಮಿಷನರಿಯವರು ಪ್ರಾರಂಭಿಸಿದ ದೇಶೀಯ ವಿದ್ಯಾಸಂಸ್ಥೆ (**Native Educational Institution**)ಗೆ ಕಮೀಷನರ್‌ರವರಿಂದ ಮಾಹೆಯಾನ ೫೦ ರೂ.ಗಳ ಭತ್ಯೆ ಸಿಗುತ್ತಿತ್ತು. ೧೮೫೧ರಲ್ಲಿ ಈ ದೇಶೀಯ ವಿದ್ಯಾಸಂಸ್ಥೆಯು ಪ್ರೌಢಶಾಲೆಯಾಗಿ ಮಾರ್ಪಾಟಾಗಿ ಪ್ರಾಂತ್ಯದ ಇತರ ವಿದ್ಯಾಸಂಸ್ಥೆಗಳಿಗೆ ಮಾದರಿಯಾಯಿತು. ಈ ಶಾಲೆಯಲ್ಲಿ ಬೈಬಲ್ ಬಗ್ಗೆ ಶಿಕ್ಷಣ ನೀಡುತ್ತಿದ್ದರು; ಹಾಜರಿ ಐಚ್ಛಿಕವಾಗಿರುತ್ತಿತ್ತು. ೧೮೫೪ರಲ್ಲಿ ಈ ಸಂಸ್ಥೆಯಲ್ಲಿ ೪೦೦ ಬಾಲಕರಿಗೆ ಸ್ಥಳಾವಕಾಶವಿದ್ದು ೨೦೦ ಬಾಲಕರು ಒಳ್ಳೆಯ ಇಂಗ್ಲೀಷ್ ಶಿಕ್ಷಣ ಪಡೆಯುತ್ತಿದ್ದರು. ಒಬ್ಬ ಇನ್‌ಸ್ಪೆಕ್ಟರನ್ನು ನೇಮಿಸಿ, ಈ ಸಂಸ್ಥೆಗೆ ಭೇಟಿ ನೀಡಿ ವರದಿ ಸಲ್ಲಿಸುವಂತೆ ಮತ್ತು ವಿದ್ಯಾರ್ಥಿಗಳು ಸಾರ್ವಜನಿಕ ಸೇವೆಗೆ ಅರ್ಹರಾಗಲು ತಕ್ಕ ವಿಷಯಗಳ ಅಭ್ಯಾಸದ ಬಗ್ಗೆ ದೇಶೀಯ ಮತ್ತು ಐರೋಪ್ಯರನ್ನೊಳಗೊಂಡ ವಿದ್ಯಾಸಮಿತಿ (**Education Board**) ಯೊಂದನ್ನು ರಚಿಸುವಂತೆ ವಿದ್ಯಾಸಮಿತಿಯ ಕಾರ್ಯದರ್ಶಿಗಳಾದ ಜೆ. ಗ್ಯಾರೆಟ್ ಮತ್ತು ಕೃಷ್ಣಂನಾಯ್ಡುರವರು ೧೯ನೇ ಮಾರ್ಚ್ ೧೮೫೪ರಲ್ಲಿ ಸರ್ಕಾರಕ್ಕೆ ನೀಡಿದ್ದ ಸಲಹೆಗೆ ೧ನೇ ಜುಲೈ ೧೮೫೪ರಲ್ಲಿ ಕಬ್ಬನ್‌ರ ಮಂಜೂರಾತಿ ದೊರಕಿತು.[2]

ಈ ಶಾಲೆಗಳು ೩೦೦–೪೦೦ ವಿದ್ಯಾರ್ಥಿಗಳಿಗೆ ಇಂಗ್ಲೀಷ್ ಭಾಷೆಯ ಬಗ್ಗೆ ಅರೆ ತಿಳುವಳಿಕೆ ನೀಡಿ ಉನ್ನತ ಹುದ್ದೆಗೂ ಅವಕಾಶವಿಲ್ಲದೆ, ಜನಗಳಿಗೆ ಉಪಯೋಗವಾಗದಿರುವುದಕ್ಕೆ ಶಿಕ್ಷಕರ ಅಲ್ಪವೇತನ, ತರಬೇತಿಯಿಲ್ಲದಿರುವುದೇ ಕಾರಣವೆಂದು ಭಾವಿಸಿದ ರೆವರೆಂಡ್ ಗ್ಯಾರೆಟ್‌ರವರು ೧೧ನೇ ಅಕ್ಟೋಬರ್ ೧೮೫೩ರಲ್ಲಿ ಬೆಂಗಳೂರು ದೇಶೀಯ ವಿದ್ಯಾಸಂಸ್ಥೆಯಲ್ಲಿ ನಾರ್ಮಲ್ ತರಬೇತಿ ತರಗತಿಯೊಂದನ್ನು ಪ್ರಾರಂಭಿಸುವಂತೆಯೂ ಬೆಂಗಳೂರು ಪೇಟೆ ಮತ್ತು ಬೆಂಗಳೂರು ದಂಡು ಇಲ್ಲಿ ತಲಾ ಒಂದೊಂದು ಇಂಗ್ಲೀಷ್ ಶಾಲೆಯನ್ನು ಪ್ರಾರಂಭಿಸಿದಲ್ಲಿ ಭಾಷಾ ಪ್ರಚಾರಕ್ಕೆ ಸಹಾಯಕವಾಗುವುದೆಂದೂ ಸಲಹೆ ಮಾಡಿರುತ್ತಾರೆ.[3] ವಿದ್ಯಾರ್ಥಿವೇತನ ಪಡೆಯುವ ವಿದ್ಯಾರ್ಥಿಗಳಿಗೆ ಬೆಂಗಳೂರಿನ ಕೇಂದ್ರೀಯ ಸಂಸ್ಥೆಗೆ ಉನ್ನತ ತರಗತಿಗೆ ಭರ್ತಿ ಮಾಡುವಂತೆ ಸಲಹೆ ನೀಡಿದ್ದುದಲ್ಲದೆ, ೫೦೦ ರೂ.ಗಳನ್ನು ಈ ಕೆಳಗಿನಂತೆ ವಿನಿಯೋಗಿಸಲು ಸೂಚಿಸಿರುತ್ತಾರೆ :

| | |
|---|---|
| ಬೆಂಗಳೂರು ದಂಡಿನ ನೂತನ ಶಾಲೆಗೆ | ರೂ. ೨೦೦ |
| ನಾರ್ಮಲ್ ತರಬೇತಿ ತರಗತಿಯ ಇಂಗ್ಲೀಷ್ ಶಿಕ್ಷಕರಿಗೆ | ರೂ. ೧೮೦ |
| ನಾರ್ಮಲ್ ತರಬೇತಿ ತರಗತಿಯ ದೇಶೀಯ ಶಿಕ್ಷಕರಿಗೆ ಪುಸ್ತಕ, ಉಪಕರಣಗಳ ಖರೀದಿಗೆ | ರೂ. ೧೨೦ |

೧೮೫೬ರಲ್ಲಿ ದೇಶೀಯ ವಿದ್ಯಾಸಂಸ್ಥೆಗೆ ನೀಡುತ್ತಿದ್ದ ಭತ್ಯ ೮೦೦ರೂ ; ಶಾಲೆಯ ೧೫೦ ರೂ. ಬೆಲೆಯ ಕಟ್ಟಡ ವೆಸ್ಲಿಯನ್ ಮಿಷನ್‌ಗೆ ಸೇರಿತ್ತು.[4] ಈ ಸಂಸ್ಥೆಯಲ್ಲಿದ್ದ ವೈಜ್ಞಾನಿಕೋಪಕರಣ ಸಾವಿರ ಪೌಂಡ್ ಬೆಲೆಯದಾಗಿತ್ತು ೧೮೫೮–೧೮೫೯ರಲ್ಲಿ ಮಿಷನರಿಯಿಂದ ಬೇರ್ಪಟ್ಟ ಈ ಶಾಲೆಯು ಮದ್ರಾಸ್ ವಿಶ್ವವಿದ್ಯಾನಿಲಯಕ್ಕೆ ಸೇರಿದ ಸಂಪೂರ್ಣ ಸರ್ಕಾರಿ ಸಂಸ್ಥೆಯಾಯಿತು.

**ಬೆಂಗಳೂರು ಪ್ರೌಢಶಾಲೆ :** ಬೆಂಗಳೂರು

---

1. ಶ್ರೀನಿವಾಸ ಹಾವನೂರ : ಹೊಸಗನ್ನಡದ ಅರುಣೋದಯ, ಪು. ೭೯
2. Education File 1 of 1854, Sl. 1–2
3. Education File 1 of 1854, Sl. 1–2
4. Education File 1 of 1856, Sl. 1

ಪ್ರೌಢಶಾಲೆಯು ೧೮೭೫ರಲ್ಲಿ 'ಸೆಂಟ್ರಲ್ ಕಾಲೇಜು' ಎಂದು ಕರೆಯಲ್ಪಟ್ಟು ಮದ್ರಾಸ್ ವಿಶ್ವವಿದ್ಯಾನಿಲಯಕ್ಕೆ ಸೇರಿದ ಪ್ರಥಮದರ್ಜೆ ಕಾಲೇಜಾಯಿತು. ರೆವರೆಂಡ್ ಜೆ. ಗ್ಯಾರೆಟ್‌ರವರು ಈ ಕಾಲೇಜಿನ ಪ್ರಥಮ ಪ್ರಾಂಶು ಪಾಲರಾಗಿಯೂ ಸೇವೆ ಸಲ್ಲಿಸಿದರು. ಅಲ್ಲಿನ ವಿದ್ಯಾರ್ಥಿಯಾಗಿದ್ದ ದಿವಂಗತ ಡಾ॥ ಆರ್. ನರಸಿಂಹಾಚಾರ್ಯರು ತಮ್ಮ ನೆನಪುಗಳನ್ನು ತಿಳಿಸುತ್ತಾ, "ಪ್ರೌಢಶಾಲೆಯೆಂದು ಕರೆಯಲ್ಪಟ್ಟರೂ ಇಲ್ಲಿ ಬಿ. ಎ. ಪದವಿ ತರಗತಿಯವರೆಗೆ ಕಲಿಸಲಾಗುತ್ತಿತ್ತು. ನಾನು ೧೮೭೮ರಲ್ಲಿ ಸೆಂಟ್ರಲ್ ಕಾಲೇಜನ್ನು ಸೇರಿದಾಗ ಅಲ್ಲಿ ಬಿ. ಎ., ಎಫ್.ಎ. ತರಗತಿಗಳಲ್ಲದೆ ಚಿಕ್ಕ ಅಂದರೆ ಅಕ್ಷರಾಭ್ಯಾಸದ ತರಗತಿಯೂ ನಡೆಯುತ್ತಿತ್ತು. ಎಲ್ಲವೂ ಇಂದಿನ ಗ್ರಂಥಭಂಡಾರವಿರುವ ಮಧ್ಯದ ಬ್ಲಾಕಿನಲ್ಲಿ ನಡೆಯುತಿತ್ತು"[5] ಎಂದು ಸ್ಮರಿಸಿಕೊಂಡಿದ್ದಾರೆ. ೧೮೭೯ರಲ್ಲಿ ಪ್ರಾಂಶುಪಾಲರಾಗಿದ್ದ ಚಾರ್ಲ್ಸ್ ವಾಟರ್ಸ್‌ರವರು ಆರ್. ನರಸಿಂಹಾಚಾರ್ಯರು ಎಫ್. ಎ. ಪರೀಕ್ಷೆಯಲ್ಲಿ ಪ್ರಥಮದರ್ಜೆಯಲ್ಲಿ ಉತ್ತೀರ್ಣರಾದಾಗ ಸಂತೋಷ ತಡೆಯಲಾರದೆ ತರಗತಿಯಲ್ಲಿ ತಮ್ಮ ಟೊಪ್ಪಿಗೆಯನ್ನು ಎಸೆದು ಕುಣಿದಾಡಿದರಂತೆ. ಅಂದಿನ ಕಾಲದಲ್ಲಿ ಐರೋಪ್ಯ ಪ್ರಾಧ್ಯಾಪಕರೊಬ್ಬರು ತಮ್ಮ ವಿದ್ಯಾರ್ಥಿಯೊಬ್ಬನ ವಿದ್ಯಾಪ್ರಗತಿಯ ಬಗ್ಗೆ ವಹಿಸುತ್ತಿದ ಆಸ್ಥೆ, ಕಾಳಜಿಯನ್ನು ಇಲ್ಲಿ ನಾವು ಗಮನಿಸಬಹುದು.

ಈ ಸಂಸ್ಥೆಯ ವಿದ್ಯಾರ್ಥಿಗಳು ೧೮೬೩ರಲ್ಲಿ ಪ್ರಥಮವಾಗಿ ಮೆಟ್ರಿಕ್ಯುಲೇಷನ್ ಮತ್ತು ೧೮೬೬ರಲ್ಲಿ ಬಿ.ಎ. ಪರೀಕ್ಷೆಗೆ ಹಾಜರಾಗಿದ್ದು, ಮೂವರು ಐರೋಪ್ಯ ವಿದ್ಯಾರ್ಥಿಗಳು ಉತ್ತೀರ್ಣರಾಗಿದ್ದರು. ೧೮೬೧ರಲ್ಲಿ ಒಂದು ನಾರ್ಮಲ್ ಶಾಲೆಯು ಮತ್ತು ೧೮೬೨ರಲ್ಲಿ ಒಂದು ಇಂಜಿನಿಯರಿಂಗ್ ಶಾಲೆಯು ಬೆಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟವು.

ಇವೆಲ್ಲವೂ ಇಂಗ್ಲೀಷ್ ಶಿಕ್ಷಣದ ಬಗ್ಗೆ ಜನಗಳಿಗಿದ್ದ ಉತ್ಸಾಹ ಪ್ರತಿಕ್ರಿಯೆಯನ್ನು ಸ್ಪಷ್ಟಪಡಿಸಿದರೂ ಇದು ಕೇವಲ ಸಮಾಜದ ಒಂದು ವರ್ಗದ ಜನಗಳಿಗೆ ಮತ್ತು ಹೆಚ್ಚಾಗಿ ಪಟ್ಟಣವಾಸಿಗಳಿಗೆ ಸೀಮಿತವಾಗಿತ್ತು. ಬಹಳ ಜನ ಮತಾಂತರದ ಭಯದಿಂದ ತಮ್ಮ ಮಕ್ಕಳನ್ನು ಇಂಗ್ಲೀಷ್ ಶಾಲೆಗಳಿಗೆ ಕಳುಹಿಸಲು ಇಚ್ಛಿಸುತ್ತಿರಲಿಲ್ಲ. ಇಂಗ್ಲೀಷ್ ವಿದ್ಯಾಭ್ಯಾಸ ಪಟ್ಟಣದಲ್ಲಾದರೂ ಹೆಚ್ಚಾಗಿ ಉಚ್ಚ ಜಾತಿಯ ಹೆಣ್ಣುಮಕ್ಕಳಿಗೆ ಲಭ್ಯವಿರುತ್ತಿತ್ತು.

---

5. Central College, 1875-1935, Old Boys Association Souvenir, 1935